


# ಜ್ಯೋತಿಷ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

**ಸಂಚಿಕೆ : 1277 03-03-2022 ಗುರುವಾರ**

ಪ್ಲವನಾಮ ಸಂವತ್ಸರ ಉತ್ತರಾಯಣ ಶಿಶಿರಋತು ಪಾಲ್ಗುನಮಾಸ ಶುಕ್ಲಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ಪಾಡ್ಯ (21:36)<br>ನಕ್ಷತ್ರ : ಪೂರ್ವಾಭಾದ್ರಾ (25:55)<br>ರಾಹುಕಾಲ : 02:11 PM - 03:40 PM<br>ಗುಳಿಕಕಾಲ : 09:43 AM - 11:12 AM | ನಂಬಿಕೆ ಎನ್ನುವ ಸೇತುವೆ ಕುಸಿದು ಬಿದ್ದಮೇಲೆ ಕ್ಷಮೇಗಳ ಮಳೆ ಎಷ್ಟು ಸುರಿದರೂ ಏನೂ ಪ್ರಯೋಜನವಿಲ್ಲ. |



# ಈ ಜಾತಕನ ಪತ್ನಿಯು

# ಆಕರ್ಷಕ ರೂಪವುಳ್ಳ ಸುಂದರಿ

| | | | |
|---|---|---|---|
| ರಾಹು | | | |
| | | | |
| ಗುರು ಶುಕ್ರ ಬುಧ | ಗ್ರಹ | ಕುಂಡಲಿ | ಶನಿ |
| ರವಿ | | | ಕುಜ ಕೇತು |

ಈ ಕುಂಡಲಿಯಲ್ಲಿ ಜೀವಕಾರಕನಾದ ಗುರು ತನ್ನ ನೀಚಕ್ಷೇತ್ರದಲ್ಲಿದ್ದಾನೆ. ಗುರುವಿನೊಂದಿಗೆ ಸ್ತ್ರೀ, ಐಶ್ವರ್ಯ, ಸಂಪತ್ತು, ಭೋಗ, ಸಂಗೀತ, ಕಾಮಕ್ಕೆ ಕಾರಕನದ ಶುಕ್ರ ಮತ್ತು ವಿದ್ಯೆ, ಬುದ್ದಿ, ಹಾಸ್ಯ, ವಾಕ್, ನಟನೆಗೆ ಕಾರಕನಾದ ಬುಧನಿರುವುದರಿಂದ ಈ ಜಾತಕನು ಬುದ್ಧಿವಂತ, ಸ್ತ್ರೀ ಸ್ವಭಾವವುಳ್ಳವನು. ಅನೇಕ ಸ್ನೇಹಿತೆಯರಿರುವರು. ಭೂಮಿ, ಗೃಹ, ವಾಹನ ಲಾಭವಾಗುವುದು. ತನ್ನ ವಾಕ್ಚಾತುರ್ಯದಿಂದ ಎಲ್ಲರ ಸ್ನೇಹಕ್ಕೆ ಪಾತ್ರನಾಗುವನು.

ಜೀವಕಾರನಾದ ಗುರುವಿರುವ ದಿಕ್ಕಿನಲ್ಲಿಯೇ ವೈರಾಗ್ಯ ಕಾರಕ ಕೇತು, ಕೋಪಕಾರಕ ಕುಜನು ಇರುವುದರಿಂದ ಕೋಪ ನೆತ್ತಿಗೇರುವುದು. ಕೆಲವೊಮ್ಮೆ ಏಕಾಂಗಿತನ ಉಂಟಾಗುವುದು.

ಉದ್ಯೋಗಕಾರಕನಾದ ಶನಿ ಅಧಿಕಾರ, ಸರ್ಕಾರ ಕಾರಕನಾದ ರವಿಗ್ರಹದ ಮನೆಯಲ್ಲಿರುವುದರಿಂದ ಸರ್ಕಾರಿ

ಉದ್ಯೋಗ ಅಥವಾ ಖಾಸಗಿ ಸಂಸ್ಥೆಯಲ್ಲಿ ಗೌರವದ ಉದ್ಯೋಗ. ಶನಿಗೆ ಮುಂದೆ ಕುಜ, ಕೇತು ಇರುವುದರಿಂದ ಮಾಡುವ ವೃತ್ತಿಯಲ್ಲಿ ವಿಘ್ನಗಳು ಎದುರಾಗುತ್ತಿರುತ್ತದೆ.



ಪತ್ನಿಕಾರಕನಾದ ಶುಕ್ರನೊಂದಿಗೆ ಧರ್ಮ, ಸತ್ಯ, ನ್ಯಾಯ, ಆಧ್ಯಾತ್ಮಕಾರಕನಾದ ಗುರು ಮತ್ತು ವಿದ್ಯೆ, ಬುದ್ಧಿ,

ಆಕರ್ಷಣೆಗೆ ಕಾರಕನಾದ ಬುಧನಿರುವುದರಿಂದ ಈತನ ಪತ್ನಿಯು ಸಾತ್ವಿಕ ಸ್ವಭಾವದಳು, ಆಕರ್ಷಕ ರೂಪವುಳ್ಳ ಸುಂದರಿ. ಪತ್ನಿಯಿಂದ ಶುಭವಾಗುವುದು. ವಿವಾಹಕಾರಕನಾದ ಶುಕ್ರನಿರಿರುವ ದಿಕ್ಕಿನಲ್ಲಿ ಕುಜ, ಕೇತು ಇರುವುದರಿಂದ ಪತಿ, ಪತ್ನಿಯ ನಡುವೆ ವಿವಾದಗಳು ಎದುರಾಗುತ್ತಿರುತ್ತದೆ.

ಗುರುವಿನ ಕ್ಷೇತ್ರದಲ್ಲಿ ಪಿತೃಕಾರನಾದ ರವಿ ಇರುವುದರಿಂದ ಈತನ ತಂದೆಯು ಸಾತ್ವಿಕ ಸ್ವಭಾವದರು, ರವಿಗೆ ದ್ವಿತೀಯದಲ್ಲಿ ಗುರು, ಶುಕ್ರ, ಬುಧರಿಂದ ಆಸ್ತಿ-ಐಶ್ವರ್ಯವುಳ್ಳವರು. ಸಮಾಜದ ಗೌರವಕ್ಕೆ ಪಾತ್ರರಾಗುವರು.




# ಚಾಣಕ್ಯ ನೀತಿ

**ಕಷ್ಟಂ ಚ ಖಲು ಮೂರ್ಖತ್ವಂ ಕಷ್ಟಂ ಚ ಖಲು ಯೌವನಂ ।**
**ಕಷ್ಟತೂಕಷ್ಟತರಂ ಚೈವ ಪರಗೇಹನಿವಾಸನಮ್ ॥**

ಮೂರ್ಖನಾಗಿರುವುದು ಕಷ್ಟ. ಹದಿಹರೆಯದ ವಯಸ್ಸು ಕೂಡ ಕಷ್ಟ. ಆದರೆ ಬೇರೆಯವರಿಗೆ ತಕ್ಕಂತೆ ಬದುಕುವುದಿದೆಯಲ್ಲ, ಅದು ಎಲ್ಲಕ್ಕಿಂತ ಕಷ್ಟ.

ದಡ್ಡರಂತೆ ವರ್ತಿಸಿದರೆ ಎಲ್ಲರೂ ಆಡಿಕೊಳ್ಳುತ್ತಾರೆ ಅಥವಾ ಯಾರೂ ಗೌರವ ನೀಡುವುದಿಲ್ಲ. ಅದರಿಂದ

ನೋವಾಗುತ್ತದೆ. ಯೌವನದಲ್ಲಿ ಬಹುತೇಕರು ಹಿಂದೆಮುಂದೆ ಯೋಚಿಸದೆ ಮುನ್ನುಗ್ಗಿ ಏನಾದರೂ ಮಾಡಲು ಹೋಗಿ ಎಡವಿ ಬೀಳುತ್ತಾರೆ. ಆ ವಯಸ್ಸೇ ಅಂತಾದ್ದು. ಅದನ್ನು ಕಳೆಯುವುದು ಕೂಡ ಕಷ್ಟ. ಆದರೆ, ಮತ್ತೊಬ್ಬನ ಮನೆಯಲ್ಲಿ ನಮ್ಮಿಷ್ಟಗಳನ್ನೆಲ್ಲಾ ಬಲಿಕೊಟ್ಟು ಅವನಿಷ್ಟದಂತೆ ಬದುಕುವುದು ಬಹುಶಃ ಪ್ರಪಂಚದಲ್ಲಿ ಎಲ್ಲದಕ್ಕಿಂತ ಕಷ್ಟದ ಕೆಲಸ. ಅಲ್ಲಿ ಆತ್ಮಗೌರವವೂ ಇಲ್ಲ, ಬಾಹ್ಯ ಗೌರವವೂ ಇಲ್ಲ. ಗೌರವ ಇಲ್ಲದಿದ್ದರೆ ಮನುಷ್ಯ ಸತ್ತಂತೆ. ಹಾಗಾಗಿ, ನಮ್ಮನ್ನು ನಾವು ಸಾಕಿಕೊಳ್ಳುವ ಸಾಮರ್ಥ್ಯವನ್ನು ಮೊದಲು ಗಳಿಸಿಕೊಳ್ಳಬೇಕು. ಉಳಿದಿದ್ದು ತನ್ನಿಂತಾನೇ ಈಡೇರುತ್ತದೆ.


ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.

ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com